# ಕನಕದಾಸರ ವಿಶ್ವಾತ್ಮಕ ಪ್ರಜ್ಞೆ

_ಡಾ.ದಾವಲಸಾಬ ನರಗುಂದ

12ನೇ ಶತಮಾನದ ವಚನ ಸಾಹಿತ್ಯದ ನಂತರ ಹೆಚ್ಚು ಜನ ಸಮ್ಮುಖವಾದ ಸಾಹಿತ್ಯ ಪರಂಪರೆ ಎಂದರೆ ಅದು ದಾಸ ಸಾಹಿತ್ಯ. ಆದರೆ ವಚನ ಸಾಹಿತ್ಯದಷ್ಟು ವ್ಯಾಪಕತೆ, ಸಮಗ್ರತೆ ಈ ಪ್ರಕಾರಕ್ಕೆ ದೊರೆತಿಲ್ಲ. ಯಾಕೆಂದರೆ ವಚನಗಳ ಕಾಲದಲ್ಲಿ ಜಾತಿಗಿಂತ ನೀತಿ ಮುಖ್ಯವಾಯಿತು. ಆದರೆ ದಾಸ ಪರಂಪರೆಯಲ್ಲಿ ಹಾಗಾಗಲಿಲ್ಲ. ಇಲ್ಲಿ ಎಲ್ಲರಿಗೂ ಮುಕ್ತ ಅವಕಾಶ ದೊರೆಯಲಿಲ್ಲ. ವಚನಕಾರರಲ್ಲಿ ಎಲ್ಲ ಸಮುದಾಯಗಳಿಂದ ಬಂದ ಅನುಭಾವಿಗಳು ಕಂಡು ಬಂದರೆ ಹರಿದಾಸ ಪರಂಪರೆಯಲ್ಲಿ ಕನಕದಾಸರನ್ನು ಬಿಟ್ಟು ಉಳಿದವರೆಲ್ಲರೂ ಏಕವರ್ಣದ ನೆಲೆಯಿಂದ ಬಂದವರು.

ಕನಕದಾಸರು ದಾಸ ಪಂಥದವರು, ಭಕ್ತಿ ಪಂಥದವರು ಮತ್ತು ಹೆಚ್ಚಾಗಿ ಹರಿಭಕ್ತಿಯನ್ನು ಪ್ರಚುರಪಡಿಸಿದವರು. ಇಷ್ಟು ಮಾತ್ರವಲ್ಲದೆ ಅತ್ಯಂತ ಜನಜನಿತವಾಗಿರುವಂಥ ಕೀರ್ತನಕಾರರು, ಕವಿಗಳು, ಸಮಾಜ ಚಿಂತಕರು ಮತ್ತು ಅನುಭಾವಿಗಳು. ಜಗತ್ತಿಗೆ ಅವರು ನೀಡಿದ ಸಂದೇಶ ಚಿರನೂತನವಾದುದು. ಕನಕದಾಸರು 15 ಮತ್ತು 16ನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದು ದೀರ್ಘಕಾಲ ಬದುಕಿ ತಮ್ಮ ಬದುಕಿನ ಅನುಭವಗಳು ಮತ್ತು ಚಿಂತನೆಗಳಿಂದ ಜನತೆಗೆ ಮುಖ್ಯವಾಗಿರುವ ವಿಶ್ವಾತ್ಮಕ ಸಂದೇಶವನ್ನು ಕೊಟ್ಟ ಸಂತ ಶ್ರೇಷ್ಠರು. ಕನಕದಾಸರನ್ನು ನಾವು ವರ್ತಮಾನದ ಜೊತೆಗೆ ಮತ್ತೆ ಮತ್ತೆ ಅನುಸಂಧಾನಗೊಳಿಸುತ್ತಿದ್ದೇವೆ ಎಂದರೆ ಅವರು ಜೀವನಕ್ಕೆ ವಿಮುಖರಾಗಿದ್ದರಂತಲ್ಲ. ಬದಲಾಗಿ ಈ ಬದುಕಿನಲ್ಲಿರುವಂಥ ಅನೇಕ ವೈಷಮ್ಯಗಳನ್ನು, ಕಷ್ಟಕೋಟಲೆಗಳನ್ನು, ಜನಸಾಮಾನ್ಯರ ದುಃಖ ದುಮ್ಮಾನಗಳನ್ನು, ಅವರ ಸಂಕಷ್ಟಗಳನ್ನು ಪರಿಹರಿಸುವುದಕ್ಕೆ ತಮ್ಮ ಕಾವ್ಯದ ಮುಖೇನ ಮತ್ತು ಕೀರ್ತನೆಗಳ ಮೂಲಕ ಹೇಳಿದರು. ತಮ್ಮದೇ ಆದಂತಹ ದೃಷ್ಟಿಕೋನದಿಂದ ಅದನ್ನು ಜನತೆಯ ಮುಂದಿಟ್ಟರು. ಸಂತರನ್ನು ನಾವು ಸಾಮಾನ್ಯವಾಗಿ ವಿರಾಗಿಗಳು ಮತ್ತು ಸನ್ಯಾಸಿಗಳು ಅಂತ ಕರೆಯುತ್ತೇವೆ.

ಸಂತರು ವಿರಾಗಿಗಳು ಹೌದು ಆದರೆ ಲೋಕ ಜೀವನಕ್ಕೆ ವಿಮುಖರಾದವರಲ್ಲ. ಸಂತರು ಸ್ವಾಮಿಗಳಲ್ಲ, ಅವರು ಸ್ವಾಮಿಗಳ ರೀತಿಯಲ್ಲಿ ಯಾವುದೋ ಒಂದು ಪಂಥಕ್ಕೆ, ಯಾವುದೋ ಒಂದು ಪೀಠಕ್ಕೆ, ಯಾವುದೋ ಒಂದು ಮತಕ್ಕೆ ಸೀಮಿತರಾದವರಲ್ಲ. ಅವರು ಜನಸಾಮಾನ್ಯರ ನಡುವೆ ಬದುಕುತ್ತಾ ಜನಸಾಮಾನ್ಯರಿಗಾಗಿಯೇ ತಾವು ಸಂದೇಶಗಳನ್ನು ಸಾರುತ್ತಾ, ಅವರ ಸಂಕಟಗಳನ್ನು, ಅವರ ತಲ್ಲಣಗಳನ್ನು ಪರಿಹರಿಸುವುದಕ್ಕೋಸ್ಕರವಾಗಿ ಹೋರಾಡುವ ಎದೆಗಾರಿಕೆ ಸಂತರಿಗೆ ಇರುವುದರಿಂದಲೇ ಕನಕದಾಸರ ಬಗೆಗಿರುವ ಅಭಿಮಾನ, ಪ್ರೀತಿ ಹಲವು ವರ್ಷಗಳ ನಂತರವೂ ಸತತವಾಗಿ ಬೆಳೆಯುತ್ತಿದೆ. ಇದನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಬೇಕು. ಕನಕದಾಸರ ಜೀವನಕ್ಕೆ ಸಂಬಂಧಪಟ್ಟ ಹಲವು ಐತಿಹ್ಯಗಳಿವೆ. ಆ ಎಲ್ಲ ಐತಿಹ್ಯಗಳು ಭಗವಂತನ ಸಾಕ್ಷಾತ್ಕಾರಕ್ಕೆ ಸಂಬಂಧಿಸಿದವುಗಳಾಗಿವೆ. ಕನಕದಾಸರು ಯಾವ ಚಿಂತನೆಯನ್ನು ಹೊಂದಿದ್ದರು ಎಂಬುದಕ್ಕೆ ಪೂರಕವಾಗಿ ಆ ಎಲ್ಲ ಐತಿಹ್ಯಗಳನ್ನು ನಾವು ಚಾರಿತ್ರಿಕವಾಗಿ ನೋಡಬೇಕಾಗಿದೆ. ಕನಕದಾಸರ ಐತಿಹ್ಯಗಳೆಲ್ಲವು ಐತಿಹಾಸಿಕವಾಗಿ ನಡೆದವುಗಳು ಎಂಬುದಕ್ಕಿಂತ ಹೆಚ್ಚಾಗಿ ಜನಪದರು ಕನಕದಾಸರಿಗೆ ಗೌರವ ಕೊಡುವುದಕ್ಕೋಸ್ಕರವಾಗಿ ಕಟ್ಟಿಕೊಂಡಿರುವ ಮಿತ್‌ಗಳಾಗಿವೆ ಎಂದು ಹೇಳಬಹುದು.

ಅಂತಹ ಐತಿಹ್ಯಗಳಲ್ಲಿ ಬಾಳೆಹಣ್ಣಿನ ಪ್ರಸಂಗ, ಕೋಣನ ಮಂತ್ರದ ಪ್ರಸಂಗ, ಸಾಲಿಗ್ರಾಮ ಪ್ರಸಂಗ, ಉಡುಪಿಯ ಕೃಷ್ಣನ ದರ್ಶನ, ವೈಕುಂಠದ ಪ್ರಸಂಗ ಮತ್ತು ಗಂಜಿಯ ಮಹಿಮೆ ಈ ಕಥೆಗಳು ಜನಮಾನಸದಲ್ಲಿ ಬೇರೂರಿದಂತವುಗಳಾಗಿವೆ.

ಈ ಐತಿಹ್ಯಗಳಲ್ಲಿ ಬಾಳೆಹಣ್ಣಿನ ಪ್ರಸಂಗವು ನಾವು ಪ್ರಾಥಮಿಕ ಹಂತದಿಂದಲೂ ಕೇಳುತ್ತಾ ಬಂದಿದ್ದೇವೆ. ವ್ಯಾಸರಾಯರ ಇತರ ಶಿಷ್ಯರೆಲ್ಲ ಯಾರಿಗೂ ಕಾಣದ ಹಾಗೆ ಬಾಳೆಹಣ್ಣನ್ನು ತಿಂದು ಬಂದರು. ಆದರೆ ಕನಕದಾಸರು ಮಾತ್ರ ದೇವರಿಲ್ಲದ ಜಾಗ ತಮಗೆ ಕಾಣಲಿಲ್ಲ. ಹಾಗಾಗಿ ನಾನು ಅದನ್ನು ತಿನ್ನುವುದಕ್ಕೆ ಆಗಲಿಲ್ಲವೆಂದು ವಾಪಸ್ಸು ತಂದರು. ಇನ್ನೊಂದು ಕಥೆಯಲ್ಲಿ ಒಂದು ಸಲ ಅವರ ಗುರುಗಳು ಎಲ್ಲ ಶಿಷ್ಯರಿಗೂ ಕಿಲೀಬುಗಟ್ಟಿದ ತಾಮ್ರದ ಚೊಂಬನ್ನು ಕೊಟ್ಟು ಇವುಗಳನ್ನು ತೊಳೆದು ಶುದ್ದವಾದ ಕುಡಿಯುವ ನೀರನ್ನು ತನ್ನಿರಿ ಎಂದರು. ಎಲ್ಲ ಶಿಷ್ಯರು ತಾಮ್ರದ ಚೊಂಬಿನ ಹೊರಭಾಗವನ್ನು ಥಳಥಳಿಸುವಂತೆ ಚೆನ್ನಾಗಿ ತಿಕ್ಕಿ ತೊಳೆದು ಅದರಲ್ಲಿ ಕುಡಿಯುವ ನೀರನ್ನು ತುಂಬಿ ತಂದರು. ಕನಕದಾಸರು ಮಾತ್ರ ಆ ಕಿಲೀಬುಗಟ್ಟಿದ ತಾಮ್ರದ ಚೊಂಬನ್ನು ತೊಳೆಯದೇ ಹಾಗೇ ನೀರು ತಂದರು. ಆಗ ಎಲ್ಲರೂ 'ಇವನು ಆ ಚೊಂಬನ್ನು ಸ್ವಚ್ಛಗೊಳಿಸದೇ ನೀರು ತಂದಿದ್ದಾನೆ' ಎಂದು ಉಳಿದ ಶಿಷ್ಯರು ಗುರುಗಳೆದುರಿಗೆ ಫಿರ್ಯಾದು ಹೇಳಿದರು. ಆಗ ಗುರುಗಳು 'ನೀನೇಕೆ ಅದನ್ನು ಸ್ವಚ್ಛಗೊಳಿಸದೇ ನೀರು ತಂದಿದ್ದಿಯಾ' ಎಂದು ಕೇಳಿದರು. ಆಗ ಕನಕದಾಸರು 'ನಾನು ಅದರ ಒಳಗಡೆ ತೊಳೆದಿದ್ದೇನೆ. ಹಾಗಾಗಿ ಅದರೊಳಗಿನ ಶುದ್ಧ ನೀರು ಕುಡಿಯಲು ಯೋಗ್ಯವಾಗಿದೆ. ಬೇರೆಯವರೆಲ್ಲರೂ ಅದರ ಹೊರಗಡೆ ತೊಳೆದಿದ್ದಾರೆ' ಎಂದು ಹೇಳಿದರು.

ಕನಕದಾಸರ ಬಗೆಗಿರುವ ಎಲ್ಲ ಕಥೆಗಳು ಒಂದು ಪ್ರತೀತಿಯಾಗಿ ಯಾಕಿಷ್ಟು ಪ್ರಚಲಿವಾಗಿದೆ ಎಂದರೆ ಅವರು ಸಂತರು. ಸಂತರು ಬೋಧಿಸಿದ್ದು ಒಳಗಿನ ಅಥವಾ ಅಂತರಂಗದ ತೊಳೆಯುವಿಕೆಯ ಬಗ್ಗೆ. ಅಂತರಂಗ ಶುದ್ಧಿಯಾದರೆ ಬಹಿರಂಗದ ಶುದ್ಧಿಯೂ ಕೂಡ ಆಗುತ್ತದೆ. ಭಕ್ತನಾದವನು ತನ್ನ ಒಳಗಡೆ ಎಷ್ಟು ಪರಿಶುದ್ಧನಾಗಿದ್ದಾನೆ? ದೇವರನ್ನು ಎಷ್ಟು ಭಕ್ತಿ ಪೂರ್ವಕವಾಗಿ ಆರಾಧಿಸುತ್ತಿದ್ದಾನೆಂಬ ಆಧಾರದ ಮೇಲೆ ದೇವರು ಒಲಿಯುವುದು ಅಂತರಂಗದ ರೂಪಕ್ಕೆ ಹೊರತು ಬಾಹ್ಯ ರೂಪಕ್ಕಲ್ಲ. ಇನ್ನು ಕನಕನ ಕಿಂಡಿಯ ಕತೆಯಂತೂ ಲೋಕ ಪ್ರಸಿದ್ಧವಾದುದು. ಆ ಕತೆಯ ಪ್ರಕಾರ ಕನಕದಾಸರಿಗೆ ಮುಖ್ಯದ್ವಾರದ ಮುಖಾಂತರ ದೇವರ ದರ್ಶನ ಮಾಡುವುದಕ್ಕೆ ಕೆಲವು ಪಟ್ಟಭದ್ರ ಹಿತಾಸಕ್ತಿಗಳು ಅವಕಾಶ ಕೊಡಲಿಲ್ಲವೆನ್ನುವುದು ಒಂದು ಪ್ರತೀತಿ. ಅದರಿಂದಾಗಿ ಅವರು ಅತ್ಯಂತ ನಿರ್ಮಲವಾದ ಭಕ್ತಿಯಿಂದ ದೇವರನ್ನು ಸ್ತುತಿಸಿದರು. ಕನಕದಾಸರ ಭಕ್ತಿಗೆ ಒಲಿದು ಉಡುಪಿಯ ಶ್ರೀಕೃಷ್ಣ ಗೋಡೆಯನ್ನು ಒಡೆದು ದರ್ಶನವನ್ನು ಕೊಟ್ಟನೆಂಬುದು ಒಂದು ಐತಿಹ್ಯ.

ಭಕ್ತಿ ಪಂಥ ಬಹಳ ಮುಖ್ಯವಾಗಿ ಗಮನಕೊಟ್ಟಿದ್ದು ಅಂತರಂಗದ ಶುದ್ಧಿಯ ಕಡೆಗೆ. ಯಾರು ನಿರ್ಮಲ ಅಂತಃಕರಣದಿಂದ ದೇವರನ್ನು ಸ್ಮರಿಸುತ್ತಾರೋ ಅಂತವರಿಗೆ ದೇವರು ಒಲಿಯುತ್ತಾನೆ ಎಂಬ ದಿವ್ಯ ಸಂದೇಶವನ್ನು ಕನಕದಾಸರು ತಮ್ಮ ಕೀರ್ತನೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ದೇವರನ್ನು ಒಲಿಸಿಕೊಳ್ಳಲು ಬಗೆ ಬಗೆಯ ಫಲ ಪುಷ್ಪಗಳನ್ನು ತಂದು ಅರ್ಪಿಸುತ್ತಾರೆ. ಆದರೆ ನಿಜವಾದ ಭಕ್ತನಾದವನು, ಸಂತನಾದವನು ತನ್ನ ಮನಸ್ಸನ್ನೇ ಪುಷ್ಪವನ್ನಾಗಿ ಮಾಡಿ ದೇವರಿಗೆ ಅರ್ಪಿಸುತ್ತಾನೆ. ಆದ್ದರಿಂದ ಅಂತಹವರಿಗೆ ದೇವರು ಒಲಿಯುತ್ತಾನೆಂಬ ಸಂದೇಶ ಕನಕದಾಸರು ಕೊಟ್ಟಿದ್ದಾರೆ. ಹೀಗೆ ಕನಕದಾಸರು ಕಲಿಗಳೂ ಹೌದು, ಕವಿಗಳೂ

ಹೌದು ಜೊತೆಗೆ ಅನುಭಾವಿಗಳೂ ಹೌದು. ಕನಕದಾಸರ ಬಗ್ಗೆ ಹಲವು ಮಿತ್ ಗಳು ಇವೆ. ಇಂಥ ಮಿತ್ ಗಳು ಬೇರೆ ಯಾವ ಸಂತರಿಗೂ ಇಲ್ಲ. ಯಾಕೆಂದರೆ ಕನಕದಾಸರು ಜನಸಾಮಾನ್ಯರ ನಡುವೆ ಬದುಕಿದವರು. ಅವರ ನಾಡಿಮಿಡಿತ ಕನಕದಾಸರಿಗೆ ಗೊತ್ತಿತ್ತು. ಸಮಾಜದ ನಂಜಿನ ಕೈಗಳು ಕನಕದಾಸರಿಗೆ ಹದವಾಗಿ ಸುಟ್ಟಿದ್ದವು. ಇತರ ದಾಸರಿಗಿಂತ ಕನಕದಾಸರು ಕೊಟ್ಟ ಕುಲದ ಸಂದೇಶ ಜನಜನಿತವಾಗಿದೆ.

"ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲೀರಾ?
ಜಲವೇ ಸಕಲ ಕುಲಕ್ಕೆ ತಾಯಿಯಲ್ಲವೇ?
ಜಲದ ಬೊಬ್ಬುಳಿಯಂತೆ ಸ್ಥಿರವಲ್ಲ ಈ ದೇಹ...."

ಕನಕದಾಸರ ಕಾಲಘಟ್ಟದಲ್ಲಿ ಕರ್ಮಠವಾಗಿರುವಂಥ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಸಿದ್ಧಾಂತ ಕೆಳಜಾತಿ ಮತ್ತು ಮೇಲ್ಜಾತಿ ಎಂದು ವಿಂಗಡಿಸಿತ್ತು. ಹುಟ್ಟಿನ ಆಧಾರದ ಮೇಲೆ ಶ್ರೇಷ್ಠ ಕನಿಷ್ಠ ಎಂದು ವಿಂಗಡಿಸಿತ್ತು. ಅವುಗಳನ್ನು ವಿರೋಧಿಸಿ ಅವರು ತಮ್ಮ ಕೀರ್ತನೆಗಳನ್ನು ಬರೆದರು ಮತ್ತು ಪ್ರತಿಪಾದಿಸಿದರು. ಕನಕದಾಸರು ಹೇಳಿದಂತ ಆ ಮಾತುಗಳು ಇವತ್ತಿಗೂ ಕೂಡ ಕನ್ನಡದ ಜನಮಾನಸದಲ್ಲಿ ಮಾರ್ದನಿಸುತ್ತಿವೆ.

"ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಪೇಳಿರಯ್ಯ
ಆತ್ಮಾಂತರಾತ್ಮನೆಲೆಯಾದಿಕೇಶವ
ಆತನೊಲಿದ ಮೇಲೆ ಯಾವ ಕುಲವಯ್ಯ"

ಬಹಳ ಅರ್ಥಗರ್ಭಿತವಾದ ಒಂದು ಸಂದೇಶ ಇವತ್ತಿಗೂ ಕೂಡ ನಮಗೆ ಅದಮ್ಯವಾಗಿರುವಂತ ಸಂದೇಶ. ನಮ್ಮ ಸಮಾಜ ಇವತ್ತು ಜಾತಿ ವ್ಯವಸ್ಥೆಯಿಂದ ಸಂಪೂರ್ಣವಾಗಿ ಮುಕ್ತವಾಗಿಲ್ಲ. ಈಗಲೂ ಮೇಲು, ಕೀಳು ಎಂಬ ವೈಷಮ್ಯವಿದೆ ಮತ್ತು ತಾರತಮ್ಯವಿದೆ. ಕನಕದಾಸರ ಈ ಕೀರ್ತನೆಯ ಸಾರಾಂಶವನ್ನು ಗಮನಿಸಿದರೆ ಅವರು ಒಂದು ಪೂರ್ಣ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡು ಅದನ್ನು ಜನಪದರೆದೆಗೆ ತಲುಪಿಸಿದರು. ಮನುಷ್ಯ ಹುಟ್ಟುವಾಗ ಮನುಷ್ಯನಾಗಿಯೇ ಹುಟ್ಟುತ್ತಾನೆ. ಅವರವರ ಭಕ್ತಿಯಿಂದ, ಸಾಧನೆಯಿಂದ ಶ್ರೇಷ್ಠರಾಗಿ ಬೆಳೆಯುತ್ತಾರೆ. ಕನಕದಾಸರು ಆ ರೀತಿಯಾಗಿರುವ ಒಂದು ಸಾಮಾನ್ಯ ಕುರುಬ ಕುಲದಲ್ಲಿ ಹುಟ್ಟಿ ತಮ್ಮ ಭಕ್ತಿಯ ಶ್ರೇಷ್ಠತೆಯಿಂದ, ತಮ್ಮ ಚಿಂತನೆಯ ಶ್ರೇಷ್ಠತೆಯಿಂದ, ತಮ್ಮ ಬರೆವಣಿಗೆಯ ಶ್ರೇಷ್ಠತೆಯಿಂದ ಸಂತರಲ್ಲೆಲ್ಲ ಅಗ್ರಗಣ್ಯರಾಗಿ ಬೆಳೆದರು. ಕನಕದಾಸರಿಗೆ ಹುಟ್ಟಿನಿಂದ ಬಂದಂತಹ ಜಾತಿ ಶ್ರೇಷ್ಠತೆಯಾಗಲಿ, ಮಠ ಮಾನ್ಯಗಳ ಮಾನ್ಯತೆಯಾಗಲಿ ಇದ್ದಿಲ್ಲ. ಅವರು ಬರಿಗಾಲ ಫಕೀರನಾಗಿ ಕರ್ನಾಟಕದಾದ್ಯಂತ ಸುತ್ತಿದರು. ಅವರು ಭೇಟಿ ಮಾಡಿದ ಹಲವಾರು ಜಾಗಗಳಲ್ಲಿ ಪ್ರತೀತಿಗಳು ಉಳಿದಿವೆ. ಕನಕದಾಸರು ಯಾವುದೋ ಒಂದು ಸಂದರ್ಭದಲ್ಲಿ ಕಾಶಿಗೆ ಹೋಗಿದ್ದಾಗ ಕನಕದಾಸರನ್ನು ಭೇಟಿ ಮಾಡಿದ ರಾಣಾ ಪ್ರತಾಪಸಿಂಹನು ಜೈಪುರದಲ್ಲಿ ಕನಕ ಬೃಂದಾವನವನ್ನು ಸ್ಥಾಪಿಸಿರುವ ಉಲ್ಲೇಖ ಇತಿಹಾಸದಿಂದ ತಿಳಿದುಬರುತ್ತದೆ.

ಕನಕದಾಸರು ಭಕ್ತಿ ಪಂಥದ ಪಾರಮ್ಯವನ್ನು ಭಾರತೀಯ ಮಟ್ಟದಲ್ಲಿ ಸಾರುತ್ತ ಸಂಚಿರಿಸಿದ್ದಾರೆ. ಯಾರು ಭಗವಂತನನ್ನು ನಿಜವಾದ ಭಕ್ತಿಯಿಂದ ಕರೆಯುತ್ತಾರೊ ಅಂಥವರ ಸೇವೆ ಮಾಡಲು ಭಗವಂತನೇ ಅವತರಿಸಿ ಬರುತ್ತಾನೆ. 'ನಂಬಿ ಕರೆದವರ ಸೇವಕನೆಂದು ನಂಬಿ ಬಂದೇನೋ ಹರಿಯೇ' ಎಂದು ಸ್ತುತಿಸಿದ್ದಾರೆ. ಭಗವಂತನಾದವನು ಕೇವಲ ವರ ಕೊಡುವುದಕ್ಕಲ್ಲ. ಯಾರು ಚಿತ್ತಶುದ್ಧಿಯಿಂದ, ನಿರ್ಮಲ ಮನಸ್ಸಿನಿಂದ ಸ್ಮರಿಸುತ್ತಾರೋ ಅಂತಹವರಿಗೆ ದೇವರೇ ಸ್ವತಃ ಬಂದು ಸೇವೆಯನ್ನು ಮಾಡುತ್ತಾನೆ. ಆ ರೀತಿಯ ಸಂದೇಶವನ್ನು ಕನಕದಾಸರು ನಮ್ಮ ಮುಂದೆ ಇಟ್ಟು ಹೋಗಿದ್ದಾರೆ. ಅವರ ಕಾವ್ಯಗಳು, ಕೀರ್ತನೆಗಳು ಮತ್ತು ಅವರ ಬದುಕಿನ ರೀತಿಯೇ ನಮಗೆ ದಿವ್ಯ ಸಂದೇಶ. ಒಂದು ಸಾಮಾನ್ಯ ಜಾತಿಯಲ್ಲಿ ಹುಟ್ಟಿದ ಕನಕದಾಸರು ಯಾವುದೇ ಜಾತಿ, ಮತ, ಪಂಥ, ಕುಲ ಭೇದವಿಲ್ಲದೆ ಎಲ್ಲರ ಗೌರವಕ್ಕೆ ಪಾತ್ರರಾಗಿದ್ದಾರೆಂದರೆ ಅವರು ಮಾಡಿದಂತಹ ಸಾಮಾಜಿಕ ಚಿಂತನೆ, ಜೀವಪರ ಕಾಳಜಿ, ತಾಯ್ತನ, ಜನರ ನೋವಿಗೆ ಮಿಡಿದುದು ಬಹುಮುಖ್ಯವಾಗಿದೆ. ಇವೆಲ್ಲಕ್ಕಿಂತ ಮುಖ್ಯವಾಗಿ ಅವರು ಬರೆದಂತಹ ಸೆಕ್ಯುಲರ್ ಸಾಹಿತ್ಯ ಜನರ ಎದೆಯಲ್ಲಿ ನಲಿದಾಡುತ್ತಿದೆ. ಇಂತಹ ಸಂತಶ್ರೇಷ್ಠರನ್ನು ನಾವು ಮತ್ತೆ ಮತ್ತೆ ನೆನೆಯುತ್ತಿದ್ದೇವೆಂದರೆ ಅವರು ಒಂದು ಸೀಮಿತ ಜಾತಿಗೆ ಸೇರಿದವರಂತಲ್ಲ. ಅವರು ಪ್ರಜಾಪ್ರಭುತ್ವ ವ್ಯವಸ್ಥೆಯ ಎಲ್ಲರಿಗೂ ಸೇರಿದವರು. ನೊಂದ ಮನಸುಗಳೆಲ್ಲರಿಗೂ ಸಂಬಂಧಿಸಿದವರು. ದನಿಯಿಲ್ಲದವರಿಗೆ ದನಿಯಾದವರು. ನಾವು ಇವತ್ತು ಮಾತನಾಡುವ ಬಂಡಾಯದ ಪರಿಕಲ್ಪನೆ ಎಷ್ಟೋ ವರ್ಷಗಳ ಹಿಂದೆ ಕನಕದಾಸರು ರಾಮಧಾನ್ಯ ಚರಿತ್ರೆಯ ಮೂಲಕ ಕಟ್ಟಿಕೊಡುತ್ತಾರೆ. ಬಂಡಾಯದ ರೂಪಕವಾದ ರಾಮಧಾನ್ಯ ಚರಿತ್ರೆಯಲ್ಲಿ ಬಹುಜನರ ಅನ್ನವಾಗಿದ್ದ ರಾಗಿಯ ಶ್ರೇಷ್ಠತೆಯನ್ನು ರಾಮನ ಮೂಲಕ ಸಾಬೀತುಪಡಿಸಿದರು. ರಾಮನ ಮೂಲಕ ನ್ಯಾಯ ಒದಗಿಸಿದರು. ರಾಘವ ರಾಗಿಯೆಂದು ಜನಮಾನಸದಲ್ಲಿ ಉಳಿಸಿದರು ಮತ್ತು ಬೆಳೆಸಿದರು.

ಜನಸಾಮಾನ್ಯರ ಸಂಕೇತವಾಗಿರುವ ರಾಗಿಯನ್ನು ಕೀರ್ತಿಸಿದಂತ ರೂಪಕ ಪ್ರಜ್ಞೆ ಕನಕದಾಸರದ್ದಾಗಿದೆ. ರಾಗಿಗೆ ರೋಗವಿಲ್ಲವೆಂಬ ಆತ್ಯಂತಿಕ ಸತ್ಯವನ್ನು ಕಾವ್ಯದ ಮುಖೇನ ಪ್ರಸ್ತುತಪಡಿಸಿದರು. ಶೋಷಿತ ಸಮುದಾಯದಿಂದ ಬಂದ ಕನಕದಾಸರು ಶೋಷಿತರ ಒಡಲೊಳಗಿನ ಕಿಚ್ಚು, ರೊಚ್ಚು, ಆವೇಶವನ್ನು ಕಾವ್ಯದ ಮೂಲಕ ಹೊರಹಾಕಿದರು. ತಮ್ಮ ಸಿಡಿಲಶಕ್ತಿಯ ನಾಲಗೆಯಿಂದ ಪಟ್ಟಭದ್ರ ಸಮಾಜವನ್ನು ವಿಡಂಬಿಸಿದರು. ವ್ಯವಸ್ಥೆಯಲ್ಲಿರುವ ಅವ್ಯವಸ್ಥೆಯನ್ನು ವಿರೋಧಿಸಿ ಸಂತ ಪದವಿಗೆ ಏರಿದ್ದು ಎಲ್ಲರಿಗೂ ಪ್ರೇರಣೆಯಾಗಿರುವಂಥದ್ದಾಗಿದೆ. ಅವರು ನೀಡಿದ ಕುಲದ ಸಂದೇಶ ನಮ್ಮೆಲ್ಲರಿಗೂ ಮುನ್ನಡೆಯುವಂತೆ ಮಾಡಿದೆ. ಕನಕದಾಸರು ಇಂದು ವಿಶ್ವಾತ್ಮಕ ಪ್ರಜ್ಞೆಯಾಗಿ ನಮ್ಮ ಮುಂದೆ ನಿಂತಿದ್ದಾರೆ.

ಇನ್ನು ಕನಕದಾಸರ ಮೇಲೆ ಶ್ರೀವೈಷ್ಣವ ಮತದ ಪ್ರಭಾವ ಆಗಿದೆಯೇ ಹೊರತು ವ್ಯಾಸರಾಯರ ಮಾಧ್ವಮತದ ಪ್ರಭಾವ ಆಗಿಲ್ಲ. ಹಾಗಾಗಿ ಕನಕದಾಸರು ತಮ್ಮ ಮೋಹನ ತರಂಗಿಣಿಯಲ್ಲಿ ರಾಮಾನುಜಾಚಾರ್ಯರನ್ನು ನೆನೆಸಿದ್ದಾರೆ. ಶ್ರೀವೈಷ್ಣವ ಮತಕ್ಕೆ ಸಂಬಂಧಿಸಿದ ಅನೇಕ ಉಲ್ಲೇಖಗಳು ಕನಕದಾಸರ ಕೀರ್ತನೆಗಳಲ್ಲಿ ಮತ್ತು ಕಾವ್ಯದಲ್ಲಿ ಕಂಡುಬರುತ್ತದೆ. ಉದಾ–ತಿರುಮಣಿ, ರಾಮಾನುಜ ಮತೋದ್ಧಾರಕ ತಾಮಸಗುಣಪಾಶ ಗಿರಿವಜ್ರದಂಡ ಎಂಬ ಪ್ರಯೋಗಗಳು ಇಲ್ಲಿ ಕಾಣುತ್ತೇವೆ. ಅಷ್ಟೇ ಅಲ್ಲದೇ ತಮ್ಮ ಕೆಲವು ಕೀರ್ತನೆಗಳಲ್ಲಿ ವಾದಿರಾಜರನ್ನು ಬಹಳ ಆತ್ಮೀಯವಾಗಿ ಸಂಬೋಧಿಸಿದ್ದಾರೆ. ಮಾಧ್ವಮತದ

ಕರ್ಮನಿಷ್ಠೆಯಲ್ಲಿ ಅತಿಯಾದ ನಂಬಿಕೆಯನ್ನಿರಿಸಿದ್ದ ಇತರ ದಾಸರು ಕನಕದಾಸರ ಏಳಿಗೆಯನ್ನು ಸಹಿಸಲಿಲ್ಲ. ವ್ಯಾಸರಾಯರ ಕನಕದಾಸರ ಮೇಲಿನ ಆತ್ಮೀಯತೆಯನ್ನು ಸಹಿಸದಾದರು. ಶಿಶುನಾಳ ಶರೀಫರ ಗುರುಗಳಾದ ಸ್ಮಾರ್ಥ ಬ್ರಾಹ್ಮಣರಾದ ಗೋವಿಂದಭಟ್ಟರಿಗೂ ಹೀಗೆ ಸಂಶಯದಿಂದ ಕಂಡರು. ಗೋವಿಂದ ಭಟ್ಟರ ಸ್ವಮತದವರು ಬಹಿಷ್ಕಾರ ಹಾಕಿದರು, ಅವಮಾನಿಸಿದರು, ಹಿಂಸಿಸಿದರು. ಆದರೂ ಶರೀಫನನ್ನು ಬಿಟ್ಟುಕೊಡಲಿಲ್ಲ.

ಇಲ್ಲಿ ಕನಕದಾಸರು ಮತ್ತು ಶರೀಫರಲ್ಲಿ ಒಂದೇ ತೆರನಾದ ಸಾಮ್ಯತೆ ಇದೆ. ಇವರ ಪಾಲಕರಿಬ್ಬರೂ ದೈವದಲ್ಲಿ ನಂಬಿಕೆಯನ್ನಿರಿಸಿದವರು, ಇಬ್ಬರೂ ಅವೈದಿಕ ನೆಲೆಯಿಂದ ಬಂದವರು, ಇಬ್ಬರೂ ಗುರುವಿನ ಮಾರ್ಗದರ್ಶನದಲ್ಲಿ ಬೆಳೆದವರು, ಮೇಲ್ವರ್ಗದವರಿಂದ, ಪುರೋಹಿತಶಾಹಿಗಳಿಂದ, ಉಳ್ಳವರಿಂದ ಶೋಷಣೆಯನ್ನು ಅನುಭವಿಸಿದವರು, ಜ್ಞಾನ ವಿದ್ವತ್ತು ಮತ್ತು ತಮ್ಮ ಅಸಾಮಾನ್ಯ ಪ್ರತಿಭೆಯಿಂದ ಗುರುಗಳ ಮನವನ್ನು ಗೆದ್ದವರು, ಇಬ್ಬರೂ ಸಂಸಾರದ ಸವಿಯನ್ನು ಉಂಡವರು, ಭಕ್ತಿ, ಆಧ್ಯಾತ್ಮ ಮತ್ತು ಸೆಕ್ಯುಲರ್ ಸಮಾಜದ ಬಗ್ಗೆ ಕನಸು ಕಂಡವರು ಹೀಗೆ ಬದುಕಿನ ಅನೇಕ ಮಗ್ಗುಲುಗಳನ್ನು ತಿಳಿದುಕೊಂಡು ಡೆಮಾಕ್ರಟಿಕ್ ಚಿಂತನೆ ಗೈದ ಪ್ರಮುಖ ಅನುಭಾವಿಗಳಾಗಿದ್ದಾರೆ.

ಇನ್ನು ಕರ್ನಾಟಕದ ಸಂಗೀತ ಕ್ಷೇತ್ರಕ್ಕೆ ಕನಕದಾಸರ ಕೊಡುಗೆ ಇಲ್ಲವೇ? ಎಂಬ ಪ್ರಶ್ನೆ ಏಳುವುದು ಸಹಜ. ಇದರ ಬಗೆಗಿನ ಚಿಂತನೆ ಅಗತ್ಯ. ಹಿಂದಿನ ವಿದ್ವಾಂಸರೆಲ್ಲ ಕರ್ನಾಟಕ ಸಂಗೀತ ಕ್ಷೇತ್ರಕ್ಕೆ ಮುನ್ನುಡಿ ಬರೆದವರು ವ್ಯಾಸರಾಯರು ಮತ್ತು ಪುರಂದರದಾಸರು ಎಂದು ಗೆರೆ ಎಳೆದಿದ್ದಾರೆ. ಆ ಪರಂಪರೆಯನ್ನು ಈಗಲೂ ಮುಂದುವರೆಸಿಕೊಂಡು ಬರುತ್ತಿದ್ದಾರೆ. ಕರ್ನಾಟಕ ಸಂಗೀತ ಕ್ಷೇತ್ರಕ್ಕೆ ನಾಂದಿ ಹಾಡಿದವರು ಕನಕದಾಸರು ಎಂಬುದು ನನ್ನ ವಾದ. ತಂಜಾವೂರಿನ ತುಳಜಾಜಿ ಅವರ ಸಂಗೀತ ಸಾರಾಮೃತ ಗ್ರಂಥದಲ್ಲಿ ಪುರಂದರದಾಸರ ಸುಳಾದಿಗಳನ್ನು ಉದಾಹರಿಸಿದ್ದಾನೆ ಎಂದ ಮಾತ್ರಕ್ಕೆ ಕರ್ನಾಟಕ ಸಂಗೀತದ ಪಿತಾಮಹರಾಗುತ್ತಾರೆಯೇ?. ಬಹುಮುಖ್ಯವಾಗಿ ಸುಳಾದಿಗಳು ಯಾರಿಂದ ಆರಂಭವಾಗಿವೆ ಎಂಬುದರ ಬಗ್ಗೆ ವ್ಯಾಪಕ ಸಂಶೋಧನೆ ನಡೆಯಬೇಕಾಗಿದೆ. ಕನಕದಾಸರ ಎಷ್ಟೋ ಕೀರ್ತನೆಗಳು ಇಂದು ಪುರಂದರದಾಸರ ಹೆಸರಿನಲ್ಲಿ ರಾರಾಜಿಸುತ್ತಿವೆ. ಕಡಕೋಳ ಮಡಿವಾಳಪ್ಪ ಮತ್ತು ಶಿಶುನಾಳ ಶರೀಫರ ತತ್ವಪದಗಳಲ್ಲೂ ಇದೇ ತೊಡಕಿದೆ. ಮಡಿವಾಳಪ್ಪನ ಎಷ್ಟೋ ತತ್ವಪದಗಳು ಶರೀಫನ ಹೆಸರಿನಲ್ಲಿ, ಶರೀಫನ ಅನೇಕ ತತ್ವಪದಗಳು ಬೇರೆ ಬೇರೆ ತತ್ವಪದಕಾರರ ಹೆಸರಿನಲ್ಲಿ, ಅಷ್ಟೇ ಏಕೆ ವಚನಕಾರರ ವಚನಗಳನ್ನು ಬೇರೆ ಬೇರೆ ವಚನಕಾರರ ಅಂಕಿತಗಳಲ್ಲಿ ವಿಜೃಂಭಿಸುತ್ತಿವೆ. ಕನಕದಾಸರ ಕೀರ್ತನೆಗಳೂ ಹೀಗೆ ಅಭಿವ್ಯಕ್ತಗೊಳ್ಳುತ್ತಿವೆ. ಇಲ್ಲಿ ಇನ್ನೂ ಒಂದು ಸಂಶಯ ಕಾಡುತ್ತದೆ. ಕನಕದಾಸರು ಮತ್ತು ಪುರಂದರದಾಸರು ಸಂಗೀತ ಕೃತಿಗಳನ್ನು ಒಂದೂ ರಚಿಸಲಿಲ್ಲ. ಹಾಗಾದರೆ ಸಂಗೀತ ಕ್ಷೇತ್ರಕ್ಕೆ ಹೇಗೆ ಮುನ್ನುಡಿ ಬರೆದಾರು?. ಅವರು ಸಂಗೀತ ಕೃತಿಗಳನ್ನು ಬರೆಯಲಿಲ್ಲವಾದರೂ ಗುರುವಿನ ಮೂಲಕ ಶಾಸ್ತ್ರೀಯ ಸಂಗೀತವನ್ನು ಅಭ್ಯಾಸ ಮಾಡಿದವರು ಎಂಬುದಕ್ಕೂ ಆಧಾರವಿಲ್ಲ. ಆದರೆ ಸಂಗೀತದ ಬಗೆಗಿನ ಆಸಕ್ತಿ ದುಪ್ಪಟ್ಟಾಗಿತ್ತು ಸ್ಪಷ್ಟವಾಗಿ ಗೋಚರಿಸುತ್ತದೆ. ಕನಕದಾಸರು ತಮ್ಮ ಕಾವ್ಯದಲ್ಲಿ ಜನಪದ ವಾದ್ಯಗಳ ಬಳಕೆ ವಿಪುಲವಾಗಿ ಬಳಸಿದ್ದಾರೆ. ಮೋಹನ ತರಂಗಿಣಿಯಲ್ಲಿ ಬರುವ ವೀಣೆ, ಮದ್ದಳೆ, ರಾವಣಹಸ್ತ, ಕಿನ್ನುರಿ, ಉಡುಕು ಮೊದಲಾದವುಗಳನ್ನು ಬಳಸಿದ್ದಾರೆ. ಶರೀಫರು ಸಹ ತಾಳ, ತಂಬೂರಿ, ಮದ್ದಳೆ, ಶಂಖ, ಭೇರಿ, ಕಹಳೆ ಈ ತರಹದ ಜನಪದ

ವಾದ್ಯಗಳನ್ನು ಬಳಸಿದ್ದಾರೆ. ಸಂಗೀತದ ಹಿಡಿತ ಮಿಡಿತವನ್ನು ಬಲ್ಲವರಾಗಿದ್ದರು. ಸಾಹಿತ್ಯ ಮತ್ತು ಸಂಗೀತದ ಮೂಲಕ ಜನಪದರ ಎದೆಯಲ್ಲಿ ಮನೆಮಾಡಿದವರು.

ಕನಕದಾಸರು ಯಾವುದೇ ಸ್ಥಾಪಿತ ಧರ್ಮಕ್ಕೆ ಜೋತು ಬಿದ್ದವರಲ್ಲ. ಸರ್ವ ಮತತತ್ವವನ್ನು ಸ್ವೀಕರಿಸಿ ಸ್ವತಂತ್ರ ವ್ಯಕ್ತಿತ್ವವನ್ನು ಬೆಳೆಸಿಕೊಂಡು ವಿಶಾಲವಾದ ಆಲದ ಮರದಂತೆ ಬೆಳೆದವರು. ಉಳಿದವರಿಗೂ ಬಾಳ ಹಾದಿಯ ಕಂದೀಲಾದರು. ಶೋಷಿತ ಅವೈದಿಕ ಧಾರೆಗಳಿಗೆ ಗಂಧ ಗಾಳಿಯಾದವರು. ಇವರಲ್ಲಿರುವ ವೈಚಾರಿಕತೆ ಮತ್ತು ಪ್ರಗತಿಪರ ನಿಲುವನ್ನು ಬೇರೆ ಯಾವ ದಾಸರಲ್ಲೂ ಕಾಣಲಾಗುವುದಿಲ್ಲ. ಕನಕದಾಸರು ಆಧ್ಯಾತ್ಮವನ್ನು ಒತ್ತಿ ಹೇಳುವಾಗಲೂ ಸಾಮಾಜಿಕ ಚಿಕಿತ್ಸೆಯನ್ನು ಬಿಡುವುದಿಲ್ಲ. ಕನಕದಾಸರಿಗೆ ಸಮಾಜ ಬೆಳೆದು ಬಂದುದರ ಬಗೆಗೆ, ವೃತ್ತಿಯ ಬಗೆಗೆ, ಪರಿವರ್ತನೆ, ಪಲ್ಲಟಗಳ ಬಗೆಗೆ ಸಮಗ್ರಜ್ಞಾನ ಇತ್ತು. ಹೊಟ್ಟೆ ಬಟ್ಟೆಯ ಸಮಸ್ಯೆ ನಿವಾರಣೆಯೇ ಸಮತಾವಾದ, ಸಮಾಜವಾದ ತತ್ವಗಳ ಪರಮಗುರಿಯಾಗಿದೆ ಎಂದು ತಮ್ಮ ಕೀರ್ತನೆಯಲ್ಲಿ ಹೇಳಿದ್ದಾರೆ. ಬಹುಮುಖ ಚಿಂತನೆಯ ಕನಕದಾಸರು ಸ್ವಹಿತಕ್ಕಿಂತ ಪರಹಿತಕ್ಕೆ ಲಕ್ಷ್ಯಕೊಟ್ಟರು. **'ಮಾಡು ದಾನ ಧರ್ಮ ಪರ ಉಪಕಾರವ ಮರೆಯದಿರೆಚ್ಚರಿಕೆ'** ಎಂದು ದಾಸೋಹ ತತ್ವವನ್ನು ಹೇಳಿದರು.

## ಪರಾಮರ್ಶನ ಗ್ರಂಥಗಳು


1. ಕನಕ–ಮರುದರ್ಶನ, ಬಂಜಗೆರೆ ಜಯಪ್ರಕಾಶ (ಸಂ), ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು, 2015.
2. ಕನಕ ಸಾಹಿತ್ಯ ಅಧ್ಯಯನ, ಸುರೇಶ ನಾಗಲಮಡಿಕೆ, ರಾಷ್ಟ್ರೀಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು, 2016.
3. ಕನಕದಾಸರ ಕೀರ್ತನೆಗಳು ಮತ್ತು ಮುಂಡಿಗೆಗಳು–2, ಸುಧಾಕರ (ಸಂ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, 2012.
4. ಕನಕದಾಸರ ಕಾವ್ಯ ಭಾಗ–1, ಸಾ.ಶಿ. ಮರುಳಯ್ಯ (ಸಂ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, 2012.



**ಲೇಖಕರ ವಿಳಾಸ**

ಡಾ.ದಾವಲಸಾಬ ನರಗುಂದ

ಅತಿಥಿ ಉಪನ್ಯಾಸಕರು

ಕನಕ ಅಧ್ಯಯನ ಪೀಠ

ಕರ್ನಾಟಕ ವಿಶ್ವವಿದ್ಯಾಲಯ,

ಧಾರವಾಡ–580003

ಮೊ. 9964954795/9743608020